

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ : 31-03-2021 ಪ್ರಶ್ನೆ ಸಂಖ್ಯೆ : 354 (2509)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 31-03-2021

ಉತ್ತರಿಸುವ ಸಚಿವರು : ವಸತಿ ಸಚಿವರು

ವಿಷಯ : ದೇವರಾಜ ಅರಸು ವಸತಿ ಯೋಜನೆಯಡಿ ಆಗಿರುವ ಪ್ರಗತಿಯ ಬಗ್ಗೆ

(ಅ) ದೇವರಾಜ ಅರಸು ವಸತಿ ಯೋಜನೆಯಡಿ ವಿಶೇಷ ವರ್ಗದ ವಸತಿಹೀನ ಅಂಗವಿಕಲರು, ವಿಧವೆಯರಿಗೆ ವಸತಿ ನೀಡುವ ಯೋಜನೆಯಲ್ಲಿ ಅನುದಾನ ಸಮರ್ಪಕವಾಗಿ ಬಿಡುಗಡೆಯಾಗದೇ ಯೋಜನೆಯ ಅನುಷ್ಠಾನ ಕುಂಠಿತವಾಗಿರುವ ಮತ್ತು ಫಲಾನುಭವಿಗಳು ಅನುದಾನ ಬಿಡುಗಡೆಗಾಗಿ ಸರ್ಕಾರಿ ಕಛೇರಿಗಳಿಗೆ ಅಲೆದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) 2018-19, 2019-20 ಮತ್ತು 2020-21ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಗೆ ಎಷ್ಟು ಅರ್ಹ ಫಲಾನುಭವಿಗಳಿಗೆ ವಸತಿ ನೀಡುವ ಗುರಿ ನೀಡಲಾಗಿತ್ತು; ಒದಗಿಸಲಾದ ಅನುದಾನ ಎಷ್ಟು; ಈಗಾಗಲೇ ಎಷ್ಟು ಅನುದಾನ ಫಲಾನುಭವಿಗಳಿಗೆ ಬಿಡುಗಡೆಯಾಗಿದೆ; (ವಿವರ ಒದಗಿಸುವುದು)

(ಇ) 2018-19, 2019-20 ಮತ್ತು 2020-21ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಗೆ ನೀಡಿದ್ದ ಒಟ್ಟು ಗುರಿಯಲ್ಲಿ ಈವರೆÀಗೆ ಆಗಿರುವ ಪ್ರಗತಿಯೇನು; ಎಷ್ಟು ಮಂದಿ ಫಲಾನುಭವಿಗಳು ಸಂಪೂರ್ಣ ಮನೆ ಕಟ್ಟಿಕೊಂಡಿದ್ದಾರೆ; ಉಳಿದವು ಯಾವ ಹಂತದಲ್ಲಿವೆ; ಬಾಕಿ ಉಳಿಯಲು ಕಾರಣಗಳೇನು (ವಿವರ ಒದಗಿಸುವುದು)

(ಈ) ಯಾವ ಕಾಲಮಿತಿಯಲ್ಲಿ ಸದರಿ ಯೋಜನೆಯನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಲಾಗುವುದು?